



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 32

| ಸಂಪುಟ: ೦೪ ಸಂಚಿಕೆ: ೬ | ಸೆಪ್ಟೆಂಬರ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 6 | September 2017 | Pages - 8 | A. Sub. - Rs. 20/- | Editor : Sri. B.R. Ravindranath |





ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


# ರಂಗಸಂವಾದ-೧೨ – ನಾಟಕ : ತೇಜೋ ಮುಖ

೨೨-೭-೨೦೧೭

ರಚನೆ ಮತ್ತು ನಿರ್ದೇಶನ : ಶ್ರೀ ಎ. ವಿಜಯ್




ಗ್ರೀನ್ ಸ್ಟೇಜ್ ಮತ್ತು ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ನಡೆದ ಹನ್ನೆರಡನೆ ನಾಟಕ, ಒಂದು ನೈಜ ಘಟನೆಯ ಆಧಾರಿತ ಮೊದಲ ನಾಟಕ. ಇತ್ತೀಚಿನ ವರ್ಷಗಳಲ್ಲಿ ಆ್ಯಸಿಡ್ ದಾಳಿ(acid attack) ಒಂದು ನೀಚ ಕೃತ್ಯವಾಗಿ ಮೇಲಿಂದ ಮೇಲೆ ಕೇಳಿಬರುತ್ತಿದೆ. ನಾಟಕದ ಕಥಾವಸ್ತುವು ಒಬ್ಬ ಯುವತಿಯು ಆ್ಯಸಿಡ್ ದಾಳಿಗೆ ತುತ್ತಾದ ಪ್ರಕರಣ. ಸಮಾಜದಲ್ಲಿ, ಕುಟುಂಬವರ್ಗದಲ್ಲಿ ಮತ್ತು ಸ್ನೇಹಿತ ವರ್ಗದಲ್ಲಿ ಕೇಳಿರುವಂತಹ ಅಸಹ್ಯದ ನುಡಿಗಳು, ಕೊಂಕು ನುಡಿಗಳು ಮತ್ತು ಇವೆಲ್ಲವನ್ನೂ ಧೈರ್ಯವಾಗಿ ಮೆಟ್ಟಿನಿಲ್ಲುವ ಅವಳ ನಿರ್ಧಾರ, ಆ ನಿರ್ಧಾರವನ್ನು ಬೆಂಬಲಿಸಿದ ಪ್ರೋತ್ಸಾಹದ ಮಾತುಗಳು, ಆ ಯುವತಿಯು ತನಗಾದ ಆಘಾತವನ್ನು ಮರೆತು ಮತ್ತೆ ಪುಟಿದೆದ್ದು ಕ್ರಿಯಾಶೀಲವಾಗುವಿಕೆ, ಈ ಎಲ್ಲ ಅಂಶಗಳೂ ಪ್ರೇಕ್ಷಕರ ಮೆಚ್ಚುಗೆಗಳಿಸಿತು.

ಸಂವಾದದ ಸಮಯದಲ್ಲಿ ಪ್ರೇಕ್ಷಕರು ಕೆಲವು ಸಲಹೆ ಸೂಚನೆಗಳನ್ನು ಶ್ರೀ ವಿಜಯ್ ಅವರಿಗೆ ನೀಡಿದರು. ರಕ್ತದಾನ, ಅಂಗಾಂಗ ದಾನದಂತೆಯೇ, ಆ್ಯಸಿಡ್ ದಾಳಿಗೆ ತುತ್ತಾದವರಿಗೆ "ಚರ್ಮದಾನ ಮಾಡಿ" ಎಂಬ ಕರೆ ಮೊದಲ ಸಾರಿಗೆ ಈ ನಾಟಕದಲ್ಲಿ ಕೇಳಿ ಬಂದಿತೆನ್ನಬಹುದೆಂದು ನೋಡುಗರು ಮೆಚ್ಚಿಕೊಂಡರು.

ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ರವೀಂದ್ರನಾಥ್ ಅವರು ತಂಡದ ಈ ನೂತನ ಪ್ರದರ್ಶನವನ್ನು ಸ್ವಾಗತಿಸಿದರು ಹಾಗೂ ವಂದನಾರ್ಪಣೆಯನ್ನು ಸಲ್ಲಿಸಿದರು.

## ರಂಗಸಂವಾದ ಮಾಲಿಕೆ ಸಮಾರೋಪ

ಕಳೆದ ಹನ್ನೆರಡು ತಿಂಗಳುಗಳಲ್ಲಿ ಪ್ರತಿ ತಿಂಗಳೂ ಹೊಸ ವಿಷಯವನ್ನು ಆಯ್ಕೆ ಮಾಡಿ ಬೀದಿ ನಾಟಕದ ಸಾಹಿತ್ಯವನ್ನು ರಚಿಸಿ ಸಂಭಾಷಣೆಗಳನ್ನು ರೂಪಿಸಿ ಹವ್ಯಾಸಿ ನಟ ನಟಿಯರೊಂದಿಗೆ ಜೊತೆಗೂಡಿ, ನಟನೆ ಹಾಗೂ ಸಂಭಾಷಣೆಗಳ ಅಭ್ಯಾಸ ನಡೆಸಿ ತಪ್ಪದೆ ಪ್ರತಿ ತಿಂಗಳ ನಾಲ್ಕನೇ ಶನಿವಾರದಂದು ಬಿಎಂಶ್ರೀ ಪ್ರತಿಷ್ಠಾನದಲ್ಲಿ ಪ್ರದರ್ಶನ ನೀಡಿ ಸಾಮಾಜಿಕ ಸಮಸ್ಯೆಗಳತ್ತ ಗಮನ ಸೆಳೆದು ಕಳಕಳಿಯನ್ನು ಮೂಡಿಸಿದ ರಂಗಸಂವಾದ ಮಾಲಿಕೆ ಸಮಾರೋಪಗೊಂಡಿರುತ್ತದೆ.



ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟ ಗ್ರೀನ್ ಸ್ಟೇಜ್ ತಂಡದ ರೂವಾರಿ ಶ್ರೀ ವಿಜಯ್ ಹಾಗೂ ಅವರ ತಂಡದವರಿಗೆಲ್ಲರಿಗೂ ಬಿಎಂಶ್ರೀ ಪ್ರತಿಷ್ಠಾನ ಅಭಿನಂದನೆಗಳನ್ನು ಸಲ್ಲಿಸುತ್ತದೆ.

# ಸಂಪಾದಕೀಯ

ಪ್ರೊ.ಎಸ್.ಜಿ. ಸಿದ್ದರಾಮಯ್ಯ ಅವರ ನಾಯಕತ್ವದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಸಕ್ರಿಯವಾಗಿ ಬಹಳಷ್ಟು ಚಟುವಟಿಕೆಗಳನ್ನು ನಡೆಸುತ್ತಿದೆ. ಗಣಕ ಯಂತ್ರಗಳಲ್ಲಿ ಕನ್ನಡದ ಬಳಕೆ ಸಾಕಷ್ಟು ಆಗುತ್ತಿದ್ದರೂ ತಂತ್ರಾಂಶಗಳ ಮಟ್ಟದಲ್ಲಿ ಕನ್ನಡದ ಬಳಕೆ ಸೀಮಿತ ಮಟ್ಟದಲ್ಲಿರುವುದು ತಿಳಿದ ವಿಷಯ. ಕಿಂಡಲ್ ನಲ್ಲಿ ಕನ್ನಡದ ಪುಸ್ತಕಗಳನ್ನು ಅಳವಡಿಸಲು ತಾಂತ್ರಿಕ ತೊಂದರೆಗಳಿವೆ. ಅದೇ ಮಾದರಿಯಲ್ಲಿ ಐ ಫೋನ್‌ನಲ್ಲಿ ಕನ್ನಡದ ಬಳಕೆ ಸಾಕಷ್ಟಿಲ್ಲದಿರುವುದನ್ನು ಮನಗಂಡು ಪ್ರೊ.ಸಿದ್ಧರಾಮಯ್ಯ ಅವರು ಆಪಲ್ ಕಂಪೆನಿ ಮುಖ್ಯಸ್ಥರಿಗೆ ಪತ್ರ ಬರೆದಿರುವುದು ಸಮಯೋಚಿತವಾಗಿದೆ.

ಭಾರತದ ಸಿಲಿಕಾನ್ ಸಿಟಿ ಎಂದು ಕರೆಸಿಕೊಂಡರೂ ಕನ್ನಡ ಭಾಷೆಯ ಬೆಳವಣಿಗೆಗಾಗಿ ಮಾಹಿತಿ ತಂತ್ರಜ್ಞಾನದ ಬಳಕೆ ಹೆಚ್ಚಿಲ್ಲ. ಉದಾಹರಣೆಗೆ, ಬಹುತೇಕ  ಅನುವಾದಕ ತಂತ್ರಾಂಶಗಳು ಕನ್ನಡ ಭಾಷೆಯನ್ನು ಗುರುತಿಸುವದೇ ಇಲ್ಲ. ಎಸ್ ಡಿಎಲ್ ಟ್ರಾಡೋಸ್, ವರ್ಡ್ ಫಾಸ್ಟ್ ಮುಂತಾದ ತಂತ್ರಾಂಶಗಳನ್ನು ಬಳಸಿಕೊಂಡು ಅನುವಾದ ಕಾರ್ಯ ಮಾಡಬಹುದಾಗಿದ್ದರೂ ಫಾಂಟ್ ಬಳಕೆ ಹಾಗೂ ಇತರ ಕಾರಣಗಳಿಂದ ಆ ತಂತ್ರಾಂಶದ ಪೂರ್ಣ ಬಳಕೆ ಸಾಧ್ಯವಾಗುತ್ತಿಲ್ಲ. ಜೊತೆಗೆ ಇಂತಹ ತಂತ್ರಾಂಶಗಳಿಂದ ಬಳಸಿಕೊಳ್ಳಬಹುದಾದ ವಿಪುಲ ವಾಣಿಜ್ಯ ಅವಕಾಶಗಳನ್ನು ಯಾರೂ ಬಳಸಿಕೊಳ್ಳುತ್ತಿಲ್ಲ.

ಮೊಬೈಲ್ ಬಳಸಿ ಯಾವುದೇ ಭಾಷೆಯಲ್ಲಿನ ಸಂದೇಶಗಳು, ನಾಮಫಲಕಗಳನ್ನು ನಮ್ಮ ಭಾಷೆಯಲ್ಲಿ ಓದಿಕೊಳ್ಳುವ ಸೌಲಭ್ಯಗಳು ಇನ್ನೂ ಮಾರುಕಟ್ಟೆಗೆ ಬಂದಿರುವುದಿಲ್ಲ. ಅದೇ ರೀತಿಯಲ್ಲಿ ಒಂದು ಭಾಷೆಯಲ್ಲಿ ಮಾತನಾಡುವುದನ್ನು ನಮಗೆ ಅರ್ಥವಾಗುವ ಕನ್ನಡ ಭಾಷೆಯಲ್ಲಿ ಕೇಳಿಸಿ ಕೊಳ್ಳುವ ಸೌಲಭ್ಯ ಇನ್ನೂ ಅಲಭ್ಯವಾಗಿರುತ್ತದೆ. ಕನ್ನಡದಲ್ಲಿ ಬೆರಳಚ್ಚು ಮಾಡಿದರೆ ಬೇರೆ ಭಾಷಯಲ್ಲಿ ಓದಿಕೊಳ್ಳಲು ಅಥವಾ ಕೇಳಿಸಿಕೊಳ್ಳಲು ಸಹಾಯಕವಾಗುವ ತಂತ್ರಾಂಶಗಳು ಕಾಣುತ್ತಿಲ್ಲ.

ರಾಷ್ಟ್ರ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪ್ರಶ್ನೆ ಪತ್ರಿಕೆಗಳನ್ನು ಕನ್ನಡದಲ್ಲಿಯೇ ನೀಡಬೇಕು ಎಂಬುದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನಿಲುವಾಗಿರುತ್ತದೆ. ಹಿಂದಿ ಭಾಷೆಯಲ್ಲಿ ಪ್ರಶ್ನೆ ಪತ್ರಿಕೆಗಳನ್ನು ನೀಡಬಹುದಾಗಿದ್ದರೆ ಕನ್ನಡದಲ್ಲಿಯೂ ಕೊಡಲೇ ಬೇಕು ಎಂಬ ನಿಲುವು ಸರಿ. ಗ್ರಾಮೀಣ ಪ್ರದೇಶಗಳ ಸ್ಪರ್ಧಿಗಳಿಗಲ್ಲದೇ ಸಾಮಾನ್ಯ ಮಟ್ಟದ ಸ್ಪರ್ಧಿಗಳಿಗೂ ಈ ಸೌಲಭ್ಯ ಅತ್ಯಗತ್ಯವಾಗಿರುತ್ತದೆ. ರಾಷ್ಟ್ರ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕನ್ನಡದ ಯುವಜನರ ಭಾಗವಹಿಕೆ ಬಹಳ ಕಡಿಮೆ. ಈ ಸನ್ನಿವೇಶ ಇಂದು ನಿನ್ನೆಯದಲ್ಲ. ಸುಮಾರು ೩೦–೪೦ ವರ್ಷಗಳಿಂದಲೂ ಇದು ಕಾಣಬರುತ್ತಿದೆ. ಕರ್ನಾಟಕದಲ್ಲಿ ಉದ್ಯೋಗಕ್ಕೆ ವಿಪುಲ ಅವಕಾಶಗಳಿದ್ದು ನಮ್ಮ ಯುವಜನರು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಲು ಹೆಚ್ಚು ಆಸಕ್ತಿ ವಹಿಸಬೇಕಾಗಿಲ್ಲ ಎಂದು ವಿವರಣೆ ನೀಡಲಾಗುತ್ತಿದೆ. ಒರಿಸ್ಸಾ ರಾಜ್ಯದಲ್ಲಿ ಹೆಚ್ಚು ವಾಣಿಜ್ಯ ಚಟುವಟಿಕೆಗಳಿಲ್ಲ. ರಾಷ್ಟ್ರ ಮಟ್ಟದ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಒರಿಯಾ ಅಭ್ಯರ್ಥಿಗಳು ಬಹಳ ಹೆಚ್ಚಿನ ಸಂಖ್ಯೆಗಳಲ್ಲಿ ತೇರ್ಗಡೆಯಾಗುತ್ತಾ ಬರುತ್ತಿರುವುದನ್ನು ನಾವು ಕಳೆದ ೩೦–೪೦ ವರ್ಷಗಳಿಂದ ನೋಡುತ್ತಿದ್ದೇವೆ. ರಾಷ್ಟ್ರ ಮಟ್ಟದ ಬಹುತೇಕ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗಳಲ್ಲಿ ಒರಿಸ್ಸಾ ರಾಜ್ಯದವರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು.

ಈ ರೀತಿಯ ಪರಿಸ್ಥಿತಿಯನ್ನು ಕನ್ನಡ ಭಾಷಿಕರೂ ನಿರ್ಮಾಣ ಮಾಡುವ ಸಂಕಲ್ಪ ತೊಡುವ ಕಾಲ ಈಗ ಬಂದಿದೆ. ಮೊದಲಿಗೆ ಶಾಲಾ ಮಟ್ಟದಲ್ಲಿ ನಡೆಸಲಾಗುವ ಎನ್ ಟಿಎಸ್ ಇ ಯಂತಹ ರಾಷ್ಟ್ರ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಯಿಂದ ಪ್ರಾರಂಭಗೊಂಡು ನಾಗರೀಕ ಸೇವಾ ಪರೀಕ್ಷೆಗಳವರೆಗೂ ಎಲ್ಲ ಪರೀಕ್ಷೆಗಳಲ್ಲಿ ಕನ್ನಡ ಭಾಷಿಕರ ಭಾಗವಹಿಕೆಯನ್ನು ಹೆಚ್ಚಿಸುವ ಆಂದೋಲನ ಕೈಗೊಳ್ಳುವುದು ಉಚಿತವೆನಿಸುತ್ತದೆ. ಭಾಗವಹಿಕೆ ಮಟ್ಟದಲ್ಲಿ ಇಂತಿಷ್ಟು  ಅಭ್ಯರ್ಥಿಗಳಿರಬೇಕೆಂಬ ಗುರಿಗಳಿಂದ ಪ್ರಾರಂಭಿಸಿ ತೇರ್ಗಡೆ ಮಟ್ಟದಲ್ಲಿ ಇಂತಿಷ್ಟು  ಅಭ್ಯರ್ಥಿಗಳಿರಬೇಕೆಂಬ ಗುರಿಗಳನ್ನು ಹೊಂದಿ ಆ ಪ್ರಕಾರ ಕಾರ್ಯತತ್ಪರರಾಗುವುದು ಅಗತ್ಯವೆನಿಸುತ್ತದೆ.

ರಾಷ್ಟ್ರ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳ ವಿಷಯ ವಸ್ತುಗಳಿಗೆ ಸಂಬಂಧಿಸಿದಂತೆ ಬಹುತೇಕ ವಿಷಯಗಳಿಗೆ ಅಧ್ಯಯನ ಪರಿಕರಗಳು ಕನ್ನಡದಲ್ಲಿ ಲಭ್ಯವಿರುವುದಿಲ್ಲ. ಉಚಿತ ಜ್ಞಾನ ನೀಡುವ ವಿಕಿಪಿಡಿಯಾದಂತಹ ಜಾಲತಾಣಗಳಲ್ಲಿಯೂ ಕನ್ನಡದಲ್ಲಿ ಹೆಚ್ಚು ಮಾಹಿತಿಗಳು ಲಭ್ಯವಿರುವುದಿಲ್ಲ. ಈ ಕೊರತೆಯನ್ನು ನೀಗಿಸಲು ಅಧ್ಯಯನ ಪರಿಕರಗಳನ್ನು ಸಿದ್ಧಪಡಿಸುವುದು, ತರಬೇತಿ ನೀಡುವ ವ್ಯವಸ್ಥೆಗಳನ್ನು ಸ್ಥಾಪಿಸುವಂತಹ ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕಾಗಿರುತ್ತದೆ.

ಜೊತೆಗೆ ರಾಷ್ಟ್ರ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳ ಹಿಂದಿನ ೫–೧೦ ಪರೀಕ್ಷೆಗಳಲ್ಲಿ ನೀಡಲಾದ ಪ್ರಶ್ನೆ ಪತ್ರಿಕೆಗಳಲ್ಲಿನ ಪ್ರಶ್ನೆಗಳಿಗೆ ಉತ್ತರಗಳು/ಮಾದರಿ ಉತ್ತರಗಳನ್ನು ಕನ್ನಡದಲ್ಲಿ ಸಿದ್ದಗೊಳಿಸಿ ಒಂದು ಪ್ರತ್ಯೇಕ ಜಾಲತಾಣದಲ್ಲಿ ಪ್ರಕಟಿಸುವ ವ್ಯವಸ್ಥೆಯನ್ನು ಸ್ಥಾಪಿಸಬಹುದಾಗಿರುತ್ತದೆ. ಇದಕ್ಕಾಗಿ ಪ್ರತ್ಯೇಕ ಬಜೆಟ್ ಅನ್ನು ನಿಗದಿಗೊಳಿಸಿ ವಿಷಯ ತಜ್ಞರನ್ನು ಗುರುತಿಸಿ ಅವರ ಮೂಲಕ ಹಿಂದಿನ ವರ್ಷಗಳ ಪರೀಕ್ಷೆಗಳಲ್ಲಿ ನೀಡಲಾದ ಪ್ರಶ್ನೆಗಳಿಗೆ ಸೂಕ್ತ ಉತ್ತರ/ಮಾದರಿ ಉತ್ತರಗಳನ್ನು ಸಿದ್ದಗೊಳಿಸಿ ಜಾಲತಾಣ, ಟಿವಿ ಹಾಗೂ ಇತರ ಮಾಧ್ಯಮಗಳ ಮೂಲಕ ಪ್ರಚುರಪಡಿಸಬಹುದಾಗಿರುತ್ತದೆ.

ರಾಷ್ಟ್ರ ಮಟ್ಟದ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ನಮ್ಮ ಕನ್ನಡ ಭಾಷಿಕರು ಹೆಚ್ಚು ಹೆಚ್ಚು ಭಾಗವಹಿಸುವುದು, ರಾಷ್ಟ್ರೀಯ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳ ವಿಷಯವಸ್ತುಗಳಿಗೆ ಕನ್ನಡದಲ್ಲಿ ಅಧ್ಯಯನ ಪರಿಕರಗಳನ್ನು ಸಿದ್ದಪಡಿಸುವುದು, ಕನ್ನಡದಲ್ಲಿ ತರಬೇತಿ ನೀಡುವ ವ್ಯವಸ್ಥೆಗಳನ್ನು ರೂಪಿಸಿ ಸ್ಥಾಪಿಸುವುದು ಇವುಗಳು ಇಂದಿನ ಅಗತ್ಯಗಳು.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

## ನೂತನ ಗೌರವ ಕಾರ್ಯದರ್ಶಿ – ಡಾ. ವಿಜಯಾ ಸುಬ್ಬುರಾಜ್



ದಿನಾಂಕ 20ನೇ ಆಗಸ್ಟ್ 2017 ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಹಿರಿಯ ಲೇಖಕಿ ಡಾ. ವಿಜಯಾ ಸುಬ್ಬುರಾಜ್ ಅವರನ್ನು ಗೌರವ ಕಾರ್ಯದರ್ಶಿಯಾಗಿ ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಡಾ. ವಿಜಯಾ ಸುಬ್ಬುರಾಜ್ ಅವರು 20–08–2020 ರವರೆಗೆ ಗೌರವ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಾರೆ.

ಡಾ. ವಿಜಯಾ ಸುಬ್ಬುರಾಜ್ ಅವರು ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಸ್ಥಾನವನ್ನು ಅಲಂಕರಿಸುವ ಪ್ರಥಮ ಮಹಿಳೆಯಾಗಿರುತ್ತಾರೆ.

ಡಾ. ವಿಜಯಾ ಸುಬ್ಬುರಾಜ್ ಅವರಿಗೆ ಹೊಂಗನಸು ಅಭಿನಂದಿಸುತ್ತದೆ.

## ಸೆಪ್ಟೆಂಬರ್ ೨೦೧೭ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
### ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**೦೬-೦೯-೨೦೧೭ ಬುಧವಾರ ಸಂಜೆ- ೬-೦೦ ಗಂಟೆಗೆ**

**ಗಮಕವಾಹಿನಿ-೨೦**

'ಪಂಪಭಾರತ' ಸಂಚಿಕೆ- ೭ (ಮುಂದುವರೆದ ಭಾಗ)
ವಾಚನ : ಶ್ರೀಮತಿ ನಾಗರಂಜಿನಿ
ವ್ಯಾಖ್ಯಾನ : ಶ್ರೀ ಶಾಂತಾಗೋಪಾಲ್
ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ



**೦೯-೦೯-೨೦೧೭ ಶನಿವಾರ ಸಂಜೆ- ೬-೦೦ಗಂಟೆಗೆ**

**ಶ್ರೀಮತಿ ಸಾವಿತ್ರಮ್ಮ-ಪ್ರೊ॥ ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ**

ಪ್ರದಾನ ಮತ್ತು ಅಧ್ಯಕ್ಷತೆ : ಪ್ರೊ॥ ಎಂ.ಎಚ್. ಕೃಷ್ಣಯ್ಯ
ಮಾಜಿ ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ
ಗೌರವ ಅಧ್ಯಕ್ಷರು, ಬಿಎಂಶ್ರೀ ಪ್ರತಿಷ್ಠಾನ
ಪುರಸ್ಕಾರ ಪಡೆಯುವವರು : ಪ್ರೊ॥ ಸಿ. ಮಹಾದೇವಪ್ಪ
(ಪ್ರಖ್ಯಾತ ವಿದ್ವಾಂಸರು)



**೧೦-೯-೨೦೧೭ ಭಾನುವಾರ ಬೆಳಗ್ಗೆ ೧೦: ೩೦ ಗಂಟೆಗೆ**

**ಹಳಗನ್ನಡ ಶಿಬಿರ ಸಮಾರೋಪ ಸಮಾರಂಭ**

ಅತಿಥಿಗಳು : ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ
(ಪಂಪ ಹಾಗೂ ನೃಪತುಂಗ ಪ್ರಶಸ್ತಿ ವಿಜೇತ ವಿದ್ವಾಂಸರು)



**೧೬-೦೯-೨೦೧೭ ಶನಿವಾರ ಸಂಜೆ -೬-೦೦ಗಂಟೆಗೆ**

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ
ವಿಷಯ : ಬನ್ನೇರುಘಟ್ಟ ಸ್ಥಳನಾಮ - ಒಂದು ವಿಶ್ಲೇಷಣೆ
ಚಾಲನೆ : ಡಾ. ಪಿ.ವಿ. ಕೃಷ್ಣಮೂರ್ತಿ



**೧೮-೦೯-೨೦೧೭ ಸೋಮವಾರ ಸಂಜೆ ೬-೦೦ ಗಂಟೆಗೆ**

**ಕನ್ನಡ ಸಂಸ್ಕೃತಿ ದರ್ಶನ**

(ಸಾಕ್ಷ್ಯಚಿತ್ರ ಪ್ರದರ್ಶನ)

### ಸೆಪ್ಟೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕೆ.ಪಿ. ಪೂರ್ಣಚಂದ್ರ ತೇಜಸ್ವಿ | ೮-೯-೧೯೩೮ |
| ದಿನಕರ ದೇಸಾಯಿ | ೧೦-೯-೧೯೦೯ |
| ಶ್ರೀರಂಗ | ೨೬-೯-೧೯೦೪ |
| ನಿರುಪಮಾ | ೩೦-೯-೧೯೩೧ |

### ಸೆಪ್ಟೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿದ್ದಯ್ಯ ಪುರಾಣಿಕ | ೫-೯-೧೯೯೪ |
| ಎಂ.ಗೋವಿಂದ ಪೈ | ೬-೯-೧೯೬೩ |
| ತೀ.ನಂ.ಶ್ರೀಕಂಠಯ್ಯ | ೭-೯-೧೯೬೬ |
| ಎಂ.ಆರ್. ಶ್ರೀನಿವಾಸ ಮೂರ್ತಿ | ೧೬-೯-೧೯೫೩ |
| ತಿರುಮಲೆ ರಾಜಮ್ಮ | ೨೪-೯-೧೯೮೪ |
| ಶಂಬಾಜೋಶಿ | ೨೮-೯-೧೯೯೧ |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | ೨೮-೯-೧೯೯೧ |

## ಆಧುನಿಕ ವಚನಗಳು

-ಜಿ. ಅಬ್ದುಲ್ ಬಷೀರ್

ಎತ್ತಣ ಮಾಮರ ಎತ್ತಣ ಕೋಗಿಲೆ
ಎತ್ತಣಿಂದೆತ್ತ ಸಂಬಂಧವಯ್ಯಾ?
ಎತ್ತಣ ಮಹಮ್ಮದೀಯ ಶಿಶನಾಳ ಶರೀಫ಼
ಅವಧೂತ ಜ್ಞಾನಿ ಶಿವಯೋಗಿ ಶಿಷ್ಯ
ಎತ್ತಣ ಕಳಸದ ಗೋವಿಂದಭಟ್ಟ ಸ್ಮಾರ್ತಶಾಕ್ತೇಯ ಬ್ರಾಹ್ಮಣಗುರು
ಎತ್ತಣಿಂದೆತ್ತ ಸಂಬಂಧವಯ್ಯಾ?
'ಇಮಾಂಸಾಬಿಗೂ ಗೋಕುಲಾಷ್ಟಮಿಗೂ'
ಎತ್ತಣ ಸಂಬಂಧವೆಂಬುದಕ್ಕೆ ಪ್ರಶ್ನಾತೀತವಾಗಿ ನಿಂತವನು
ತತ್ತ್ವವೇತ್ತ ಶರೀಫ಼ನಲ್ಲವೇನಯ್ಯಾ!
'ಅಲ್ಲಾರಖಾ' ನಿನ್ನಳವೆನಗಳವಡದೆಂಬುದೆಂಥ ಚೋದ್ಯವಯ್ಯಾ! ॥೨೫॥

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜುಲೈ 2017 – ಆಗಸ್ಟ್ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ರಾಸಸಾಹಿತ್ಯ, ಡಿ.ಲಿಂಗಯ್ಯ, ಟಿ.ಎಸ್. ವೆಂಕಣ್ಣಯ್ಯ, ತೀನಂಶ್ರೀ ಮತ್ತು ಶಾರದಾಹನುಮಯ್ಯ ದತ್ತಿ ಕಾರ್ಯಕ್ರಮ




ದಿನಾಂಕ ೨೬ ಜುಲೈ ೨೦೧೭ರಂದು ಪ್ರತಿಷ್ಠಾನದಲ್ಲಿ ಮೇಲ್ಕಂಡ ದತ್ತಿ ಕಾರ್ಯಕ್ರಮದಡಿಯಲ್ಲಿ ಸಾಹಿತ್ಯೇತರ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಭೂ ವೈಜ್ಞಾನಿಕ ಸರ್ವೇಕ್ಷಣ ಇಲಾಖೆಯ ನಿವೃತ್ತ ಉಪಮಹಾ ನಿರ್ದೇಶಕರಾದ ಡಾ|| ಎಚ್.ಎಸ್. ಎಂ. ಪ್ರಕಾಶ್ ಅವರು ಪ್ರಪಂಚದಾದ್ಯಂತ, ಮುಂದಿನ ಏಳೆಂಟು ವರ್ಷಗಳಲ್ಲಿ ಜ್ವಾಲಾಮುಖಿಗಳ ಸ್ಫೋಟದ ಪರಿಣಾಮವಾಗಿ, ಹವಾಮಾನದಲ್ಲಿ ತೀವ್ರತರ ಬದಲಾವಣೆಗಳುಂಟಾಗಿ. ಬರ ಪರಿಸ್ಥಿತಿ ಎದುರಿಸ ಬೇಕಾಗಬಹುದೆಂದು ತಿಳಿಸಿದರು. ಉಪನ್ಯಾಸಕ್ಕೆ ಪ್ರಾತ್ಯಕ್ಷಿಕೆಯನ್ನು ಬಳಸಿ, ಪ್ರಪಂಚದಲ್ಲಿ ಸಕ್ರಿಯವಾಗಿರುವ ನಲವತ್ತು ಜ್ವಾಲಾಮುಖಿಗಳನ್ನು ಮತ್ತು ಅವುಗಳ ಸ್ಫೋಟದ ತೀವ್ರತೆಯನ್ನೂ ವಿವರಿಸಿದರು.

ಡಾ|| ಪಿ.ವಿ.ನಾರಾಯಣ ಅಧ್ಯಕ್ಷರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿ, ಸ್ವಾಗತಕೋರಿದರು. ಗೌರವ ಕಾರ್ಯದರ್ಶಿ ಶ್ರೀ ಬಿ.ಆರ್. ರವೀಂದ್ರನಾಥ್ ವಂದನಾರ್ಪಣೆ ಸಲ್ಲಿಸಿದರು. ಸಭೆಯಲ್ಲಿ ವಿಜ್ಞಾನದ ವಿದ್ಯಾರ್ಥಿಗಳೂ ಭಾಗವಹಿಸಿದ್ದರು.

## ೦೨-೦೮-೨೦೧೭ ಗಮಕ ವಾಹಿನಿ-೧೯

ಪಂಪಭಾರತಸಂಚಿಕೆ-೬

ವಾಚನ :ಕು.ರಕ್ಷಿತಾ ಕೆ.

ವ್ಯಾಖ್ಯಾನ :ಡಾ. ಕೆ.ಆರ್. ಗಣೇಶ್

ನಿವೃತ್ತ ಕನ್ನಡ ಪ್ರಾಧ್ಯಾಪಕರು

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

ಗಮಕ ಕಲಾ ಪ್ರತಿಷ್ಠಾನದ ಸಹಯೋಗದಲ್ಲಿ ಗಮಕವಾಹಿನಿ ೧೯ರ ಕಾರ್ಯಕ್ರಮದಲ್ಲಿ ಪಂಪಭಾರತ ಸಂಚಿಕೆ-೬ರಲ್ಲಿ,

೦೨-೦೮-೨೦೧೭ರಂದು ಪ್ರತೀ ತಿಂಗಳ ಮೊದಲ ಬುಧವಾರ



ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಮಾಲೆ ಅಡಿಯಲ್ಲಿ ಶ್ರೀಮತಿ ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ-೬"ಗಮಕವಾಹಿನಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು.

ಐದನೇ ಕಂತಿನ ಭಾಗವಾಗಿ ದ್ರೌಪದಿ ಸ್ವಯಂವರದ ಪ್ರಸಂಗವನ್ನು ಕುಮಾರಿ ಅರ್ಪಿತಾ ಅವರ ವಾಚನವು ಮತ್ತು ಡಾ|| ಕೆ.ಆರ್. ಗಣೇಶ್ ನಿವೃತ್ತ ಕನ್ನಡ ಪ್ರಾಧ್ಯಾಪಕರು, ಅವರ ವ್ಯಾಖ್ಯಾನವು ಗಮಕಾಸ್ತಕರ ಮೆಚ್ಚುಗೆಗೆ ಪಾತ್ರವಾಯಿತು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ ೧೬ನೇ ಆಗಸ್ಟ್ ೨೦೧೭ರಂದು ಡಾ.ಎಸ್. ಎಲ್. ಭೈರಪ್ಪ ಹಾಗೂ ಪ್ರೊ.ಚನ್ನವೀರ ಕಣವಿ ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ೧೭-೮-೨೦೧೭ "ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಜನ್ನನ ಯಶೋಧರ ಚರಿತೆಯ ಪದ್ಯ : ೧-೩೬-ವಿಶ್ಲೇಷಣೆ.

ಚಾಲನೆ: ಶ್ರೀಮತಿ. ಡಾ.ಕೆ. ವಸಂತಲಕ್ಷ್ಮೀ ನಿವೃತ್ತ ಕನ್ನಡ ಉಪನ್ಯಾಸಕರು ಮತ್ತು ಸಂಶೋಧಕರು.

ಕಾರ್ಯಕ್ರಮದ ಆರಂಭದಲ್ಲಿ ಡಾ|| ಪಿ.ವಿ.ನಾರಾಯಣ, ಅಧ್ಯಕ್ಷರು,



ಉಪನ್ಯಾಸಕರನ್ನು ಕಾರ್ಯಕ್ರಮಕ್ಕೆ ಸ್ವಾಗತ ಕೋರಿ, ಉಪನ್ಯಾಸಕರನ್ನು ಸಭೆಗೆ ಪರಿಚಯಿಸಿದರು.

ಶ್ರೀಮತಿ ವಸಂತಲಕ್ಷ್ಮೀ ಅವರು ಕಾರ್ಯಕ್ರಮದ ಮೊದಲಿಗೆ ಜನ್ನನ ಕಾಲ, ದೇಶ, ಮನೆತನ, ಅವನ ವಿದ್ಯಾಭ್ಯಾಸ, ಇನ್ನಿತರ ಕೃತಿಗಳಲ್ಲಿ ಅವನು ತನ್ನ ಹೆಸರನ್ನು ಜನ್ನಮಯ್ಯ, ಜನ್ನಿಗ, ಜನ್ನಯ್ಯ, ಜನ್ನಮರಸ, ಜನಾರ್ಧನದೇವ ಎಂಬ ಉಲ್ಲೇಖವಿರುವುದನ್ನು ಸಂಕ್ಷಿಪ್ತವಾಗಿ ಸಭೆಗೆ ತಿಳಿಸಿದರು. ನಂತರ ಈಗೂ ಜೈನರು ಜೀವದಯಾಷ್ಟಮಿ ನೋಂಪ ವೇಳೆಯಲ್ಲಿ ವಾಚಿಸುವ ಯ-ಚರಿತ್ರೆ ಕುರಿತ ವಿಷಯಗಳನ್ನು ಹಂಚಿಕೊಂಡರು.

ಕಾವ್ಯದ ಮೊದಲನೆ ಅವತಾರದಲ್ಲಿ ಈ ಪದ್ಯವೇ ಕೇಂದ್ರ ಬಿಂದುವಾಗಿದೆ

ಎಂಬ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. "ನರ್ಮದೆಯಿಂಗೆಂಟು" ಎಂಬ ಶಬ್ದವು ಆಗಿನ ಕಾಲದಲ್ಲಿ ನಾಣ್ನುಡಿಯಾಗಿತ್ತೇ, ಒಗಟಾಗಿ ಪ್ರಯೋಗಿಸಲ್ಪಡುತ್ತಿತ್ತೇ, ಯಾವ ಯಾವ ಸಂದರ್ಭಗಳಲ್ಲಿ ಆ ಶಬ್ದವನ್ನು ಉಪಯೋಗಿಸುವ ಔಚಿತ್ಯದ ಬಗ್ಗೆ ದೀರ್ಘವಾಗಿ ಚರ್ಚೆಗೆ ಚಾಲನೆ ನೀಡಿದರು.

ಹಾಜರಿದ್ದ ಎಲ್ಲಾ ವಿದ್ವಾಂಸರುಗಳು ಪಾಲ್ಗೊಂಡಿದ್ದು ವಿಶೇಷವಾಗಿತ್ತು. ಶ್ರೀ ಗುರುಪ್ರಸಾದ್ ಅವರು ವಂದನೆ ಸಲ್ಲಿಸಿದರು.

## ೧೯-೦೮-೨೦೧೭ : ಶ್ರೀಮತಿ ರುಕ್ಮಿಣಮ್ಮ-ಶ್ರೀ ಸೀತಾರಾಮರಾವ್ ದತ್ತಿ ಕಾರ್ಯಕ್ರಮ

ಉಪನ್ಯಾಸ(ಪ್ರಾತ್ಯಕ್ಷಿಕೆಯೊಡನೆ)

ವಿಷಯ : ಹಲ್ಮಿಡಿಪೂರ್ವ ಕದಂಬರ ಕಾಲದ ಕನ್ನಡ ಶಾಸನ

ಉಪನ್ಯಾಸಕರು : ಡಾ॥ ಕೇಶವ, ನಿವೃತ್ತ ನಿರ್ದೇಶಕರು

ಮೇಲ್ಕಂಡ ದತ್ತಿಯ ಮೊದಲ ಕಾರ್ಯಕ್ರಮದ ಅಂಗವಾಗಿ, ಡಾ॥ ಟಿ.ಎಂ. ಕೇಶವ, ನಿವೃತ್ತ ಅಧೀಕ್ಷಕ ಪುರಾತತ್ವವಿದರು, ಭಾರತೀಯ ಪುರಾತತ್ವ ಸರ್ವೇಕ್ಷಣ, ಇವರು 'ಹಲ್ಮಿಡಿ ಪೂರ್ವ ಕದಂಬರ ಕನ್ನಡ ಶಾಸನ' ಎಂಬ ವಿಷಯವನ್ನು ಕುರಿತು ಪ್ರಾತ್ಯಕ್ಷಿಕೆಯೊಡನೆ ಉಪನ್ಯಾಸ ನೀಡಿದರು.

ಮೊದಲಿಗೆ ಪ್ರತಿಷ್ಠಾನದ ಅಧ್ಯಕ್ಷ ಡಾ॥ ಪಿ.ವಿ.ನಾರಾಯಣ ಅವರು




ಉಪನ್ಯಾಸಕರುಗಳ ಹಾಗೂ ದತ್ತಿ ಕುಟುಂಬದ ಸದಸ್ಯರ ಪರಿಚಯ ಮಾಡಿ ಸ್ವಾಗತಿಸಿದರು. ಸಭೆಯಲ್ಲಿ ಸಾಹಿತ್ಯಾಸಕ್ತರು ಮತ್ತು ಇತಿಹಾಸಾಸಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.

೨೦೧೩-೧೪ರಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕು ತಾಳಗುಂದದಲ್ಲಿ (ಕದಂಬರ ಮೂಲನೆಲೆ) ತಾವುಕೈಗೊಂಡ ವಿಸ್ತೃತವಾದ ಉತ್ಖನನವನ್ನು ಕುರಿತು ಡಾ॥ ಕೇಶವ ಅವರು ಆದ್ಯಂತವಾಗಿ ವಿವರ ನೀಡಿದರು. ಉತ್ಖನನದ ವೇಳೆಯಲ್ಲಿ ವಿವಿಧ ಸ್ತರಗಳಲ್ಲಿ ದೊರೆತ ಶಾತವಾಹನರ ಕಾಲದ ಪೋಟಿನ್ ನಾಣ್ಯ, ಗಂಗರಕಾಲದ ಬಿನ್ನದ ೧೩ ನಾಣ್ಯಗಳು, ಚಿನ್ನದ ಬೇಳೆ ಕಾಸು, ಕಳಚೂರಿ ಸಂಕಮನ ಶಾಸನ, ವಿನಯಾದಿತ್ಯನ ತಾಮ್ರ ಶಾಸನ, ಪೇಟಿಕಾ ಕನ್ನಡ ಲಿಪಿಯ ಕೆಲವು ತ್ರುಟಿತ ಶಾಸನಗಳು ಮತ್ತು ಮಡಿಕೆ ಕುಡಿಕೆಗಳ ಬಗ್ಗೆಯೂ ವಿವರ ನೀಡಿದರು.

ವಿವಿಧ ಸ್ತರಗಳ ಉತ್ಖನನದ ಶೋಧನೆಗಳ ಆಧಾರಗಳಿಂದ ಮತ್ತು ಶಾಸನದ ಲಿಪಿಶೈಲಿ, ಪದಗಳ ಬಳಕೆಯನ್ನು ಗಮನಿಸಿದಲ್ಲಿ, ಈಗ ದೊರಕಿರುವ ತಾಳಗುಂದದ ಶಾಸನದ ಕಾಲವನ್ನು ಕ್ರಿಸ್ತಶಕ ನಾಲ್ಕನೆ ಶತಮಾನದ ಅಂತ್ಯವೆಂದು ನಿರ್ಧರಿಸಬಹುದೆಂಬ ತಮ್ಮ ಅಭಿಪ್ರಾಯವನ್ನು ಡಾ॥ ಕೇಶವ ಅವರು ಮಂಡಿಸಿದರು.

ಖ್ಯಾತ ಕನ್ನಡ ವಿದ್ವಾಂಸರಾದ ಶ್ರೀ ಕಾರ್ತಿಕ್‌ಎಸ್ ಅವರು ಪ್ರಸ್ತುತ ಶಾಸನದ ವಿಷಯ, ಬಳಸಿರುವ ಭಾಷೆ ಹಾಗೂ ಪದಗಳ ಹಿನ್ನೆಲೆಯಲ್ಲಿ ಉಪನ್ಯಾಸಕರು ನೀಡಿದ ಅಭಿಪ್ರಾಯವನ್ನು ಸಮರ್ಥಿಸಿದರು.

ಕಾರ್ಯಕ್ರಮದ ಕೊನೆಗೆ ಕೋಶಾಧಿಕಾರಿಗಳಾದ ಡಾ.ಅನಿಲ್‌ಕುಮಾರ್ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ಎಲ್ಲರಿಗೂ ವಂದನೆ ಸಲ್ಲಿಸಿದರು.

## ಕಾರ್ಯಕಾರಿ ಸಮಿತಿ ಸಭೆ

ದಿನಾಂಕ ೨೦ನೇ ಆಗಸ್ಟ್ ೨೦೧೭ ರಂದು ಮೂರು ತಿಂಗಳುಗಳಿಗೊಮ್ಮೆ ನಡೆಸಲಾಗುವ ಕಾರ್ಯಕಾರಿ ಸಮಿತಿ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ನೂತನ ಗೌರವ ಕಾರ್ಯದರ್ಶಿಯ ಆಯ್ಕೆ ಹಾಗೂ ಹಲವಾರು ಮಹತ್ವದ ನಿರ್ಧಾರಗಳನ್ನು ಕೈಗೊಳ್ಳಲಾಯಿತು. ಈ ಸಭೆಯಲ್ಲಿ ಕಾರ್ಯಕಾರಿ ಸಮಿತಿಗ ನೂತನವಾಗಿ ಆಯ್ಕೆಗೊಂಡ ಪ್ರೊ.ಶಾಂತರಾಜು, ಪ್ರೊ.ಕೊ.ವೆಂ. ರಾಮಕೃಷ್ಣೇಗೌಡ, ಡಾ.ಬೈರಮಂಗಲ ರಾಮೇಗೌಡ ಹಾಗೂ ಡಾ. ವಿಜಯಾ ಸುಬ್ಬುರಾಜ್ ಅವರುಗಳನ್ನು ಸಭೆಗೆ ಸ್ವಾಗತಿಸಲಾಯಿತು. ಜೊತೆಗೆ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಸೇವೆ ಸಲ್ಲಿಸಿದ ಡಾ. ಎಂ.ಜಿ. ನಾಗರಾಜ, ಪ್ರೊ.ಅಬ್ದುಲ್ ಬಶೀರ್ ಹಾಗೂ ಶ್ರೀ ಗುರುಪ್ರಸಾದ ಅವರುಗಳ ಸೇವೆಗಳನ್ನು ದಾಖಲಿಸಲಾಯಿತು.

## ಶ್ರೀಮತಿ ಸಾವಿತ್ರಮ್ಮ-ಪ್ರೊ. ಎಂವೀಸಿ ಪ್ರಶಸ್ತಿ

ಬಿಎಂಶ್ರೀ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ 2017 ಇಸವಿಯ ಶ್ರೀಮತಿ ಸಾವಿತ್ರಮ್ಮ-ಪ್ರೊ.ಎಂವೀಸಿ ಪ್ರಶಸ್ತಿಯನ್ನು ಪ್ರೊ. ಸಿ. ಮಹಾದೇವಪ್ಪ ಅವರಿಗೆ ನೀಡಲಾಗುತ್ತಿದೆ.

ಈ ಪ್ರಶಸ್ತಿಯಡಿಯಲ್ಲಿ ರೂ.30000/- ಮೊತ್ತದ ಚೆಕ್ ಹಾಗೂ ಸ್ಮರಣಿಕೆಯನ್ನು ನೀಡಲಾಗುತ್ತದೆ.

ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪಕರಾದ ಪ್ರೊ. ಎಂವೀಸೀತಾರಾಮಯ್ಯ ಅವರ ನೆನಪಿನಲ್ಲಿ ಶ್ರೀಮತಿ ಸಾವಿತ್ರಮ್ಮ-ಪ್ರೊ. ಎಂವೀಸಿ ಪ್ರಶಸ್ತಿಯನ್ನು ಪ್ರೊ. ಎಂವೀಸೀತಾರಾಮಯ್ಯ ಅವರ ಕುಟುಂಬದವರು ಸ್ಥಾಪಿಸಿದ್ದು ಕಳೆದ ಹತ್ತು ವರ್ಷಗಳಿಂದ ಈ ಪ್ರಶಸ್ತಿಯನ್ನ ನೀಡಲಾಗುತ್ತಿದೆ.

## ಏಪ್ರಿಲ್-ಜುಲೈ ೨೦೧೭ ಅವಧಿಯಲ್ಲಿ ನಡೆಸಲಾದ ಕಾರ್ಯಕ್ರಮಗಳ ಸಂಕ್ಷಿಪ್ತ ವರದಿ

| ಕಾರ್ಯಕ್ರಮ | ಸಂಖ್ಯೆ |
|---|---|
| ಗಮಕವಾಹಿನಿ | ೪ |
| ಕನ್ನಡ ಸಂಸ್ಕೃತಿ | ೪ |
| ಅಕ್ಕರಗೊಟ್ಟಿ | ೪ |
| ರಂಗಸಂವಾದ | ೪ |
| ದತ್ತಿ ಕಾರ್ಯಕ್ರಮಗಳು | ೬ |
| ಪ್ರಶಸ್ತಿ | ೪ |
| ಸಂಶೋಧನ ದಿನ | ೧ |
| ಒಟ್ಟು | ೨೭ |




**ಚೊಂಬು:** ತಂಬಿಗೆ ಎಂಬರ್ಥದ ಈ ಪದದ ಇನ್ನೊಂದು ರೂಪ ಚೆಂಬು ಅಥವಾ ಚಂಬು. ತಮಿಳು, ತೆಲುಗು, ಮಲಯಾಳಂ ಮತ್ತು ತುಳು ಭಾಷೆಗಳಲ್ಲೂ ಈ ಶಬ್ದ ಬಳಕೆಯಲ್ಲಿದೆ. ಇದು ಚೆಂಬೊನ್ ಎಂಬ ರೂಪದಿಂದ ಬಂದುದು, ಅಥವಾ ಅದರ ಸವಕಳಿ ರೂಪ. ಚೆಂಬೊನ್ ಎಂದರೆ ತಾಮ್ರ ಎಂಬ ಅರ್ಥವಿತ್ತು, ಕೆಚ್ಚನೆಯ ಅಥವಾ ಕೆಂಪಾದ ಎಂಬರ್ಥದ ಚೆಂ ಪೂರ್ವಪದವಾಗಿ ಬಂದ ಅನೇಕ ಶಬ್ದಗಳಿವೆ: ಚೆಂಬುಗೆಂಪು ಎಂದರೆ ತಾಮ್ರದಂತಹ ಕೆಂಪು, ಚೆಂಬೆರಲ್ ಎಂದರೆ ಕೆಂಪು ಬೆರಳು, ಚೆಂಬೆಳಗು ಎಂದರೆ ಬೆಳಗಿನ ಕೆಂಪಾದ ಕಾಂತಿ ಇತ್ಯಾದಿ. ಚೆಂಬೋತ ಎಂಬುದು ಒಂದು ಬಗೆಯ ಕೆಂಪು ಬಣ್ಣದ ಪಕ್ಷಿಯ ಹೆಸರು; ಅದೇ ಕೆಂಬೋತ ಅಥವಾ ಕೆಂಬೂತ ಎಂದಾಗಿದೆ. ಸಮಾಸವಾಗುವಾಗ ಕೆಂಪು ಎಂಬರ್ಥದ ಪೂರ್ವಪದ ಕೆಂ ಎಂಬುದು ಚೆಂ ಎಂಬುದಾಗಿ ಬದಲಾಗುತ್ತದೆ [ಇದನ್ನು ಭಾಷಾವಿಜ್ಞಾನದಲ್ಲಿ ತಾಲವ್ಯೀಕರಣ ಎನ್ನುತ್ತಾರೆ; ಚ ಎಂಬ ವರ್ಣವು ತಾಲುವಿನಲ್ಲಿ – ಅಂದರೆ ಬಾಯ ಅಂಗುಳು – ಹುಟ್ಟುವುದರಿಂದ ಈ ಪ್ರಕ್ರಿಯೆಗೆ ಈ ಹೆಸರು ಬಂದಿದೆ]. ಕೆಂ ಎಂಬುದಕ್ಕೆ ಪೊನ್ ಎಂಬುದು ಸೇರಿ ಚೆಂಬೊನ್ ಆಗಿದೆ. ಹಳಗನ್ನಡದಲ್ಲಿ ಪೊನ್ ಎಂದರೆ ಲೋಹ ಎಂದಷ್ಟೇ ಅರ್ಥವಿದ್ದುದು; ಹೀಗಾಗಿ ಚೆಂಬೊನ್ ಎಂದರೆ ಕೆಂಪು ಲೋಹ ಎಂಬ ಅರ್ಥವಿತ್ತು. "ಚೆಂಬೊನ್ನ ಘಟ" (ತಾಮ್ರದ ಕೊಡ)ಎಂಬ ಪ್ರಯೋಗವು ಹದಿಮೂರನೆಯ ಶತಮಾನದ ಕವಿ ಎರಡನೆಯ ಗುಣವರ್ಮನ 'ಪಾರ್ಶ್ವನಾಥಪುರಾಣ'ದಲ್ಲಿದೆ. ಚೆಂಬು ಎಂದರೂ ತಾಮ್ರ ಎಂದೇ ಅರ್ಥವಿತ್ತು. ಚೆಂಬುಕುಟಿಗ ಅಥವಾ ಚೆಂಬುಕುಟ್ಟಿಗ ಎಂದರೆ ತಾಮ್ರದ ಕೆಲಸ ಮಾಡುವವನು.

ಕೆಲವು ಕಾವ್ಯಗಳಲ್ಲಿ ಚೆಂಬೊನ್ ಎಂಬ ಪದವನ್ನು ಚಿನ್ನದ ನಾಣ್ಯ ಎಂಬರ್ಥದಲ್ಲಿಯೂ ಬಳಸಿರುವುದು ಕಾಣುತ್ತದೆ. "ಚೆಂಬೊಂಗಳಂ ಓರಂತಿರೆ ಬೇಡಿಕೊಳ್ವಂ ಎನ್ನಾರ್ಪನಿತಂ" ಎಂಬ ಮಾತು ಕ್ರಿಶ ಹನ್ನೆರಡನೆಯ ಶತಮಾನದ ಕವಿ ನಯಸೇನನ 'ಧರ್ಮಾಮೃತ'ದಲ್ಲಿದೆ. ಚೆಂಬು ಎಂಬುದು ಮುಂದೆ ಗೋಪುರದ ಕಳಶ ಎಂಬರ್ಥದಲ್ಲಿಯೂ ಬಳಕೆಯಾಗಿದೆ.

'ಕೈಗೆ ಚೆಂಬು ಕೊಟ್ಟ' 'ಚೆಂಬೇ ಗತಿ' ಇತ್ಯಾದಿ ಮಾತುಗಳನ್ನು ಹೊಸಗನ್ನಡದಲ್ಲಿ ನಾವು ಬಳಸುತ್ತೇವೆ. ದಾಸಯ್ಯಗಳು ಚೆಂಬುಹಿಡಿದು ಭಿಕ್ಷೆಗೆ ಬರುವುದು ಹೀಗಾಗಿ ಚೆಂಬು ಹಿಡಿಯುವುದು ಎಂದರೆ ಭಿಕ್ಷೆ ಬೇಡು ಎಂಬರ್ಥ ಬಂದು, ಚೆಂಬು ಕೊಡು ಎಂದರೆ ಭಿಕ್ಷೆ ಬೇಡುವ ಸ್ಥಿತಿಯುಂಟುಮಾಡು ಎಂಬ ವ್ಯಂಗ್ಯದ ಅರ್ಥ ಬಂದಿದೆ.'ನಮ್ಮಪ್ಪ ದೊಡ್ಡ ಚೆಂಬು ಕೊಟ್ಟ' ಎಂದರೆ ಏನೇನೂ ಕೊಡಲಿಲ್ಲ ಎಂಬುದೇ ಅರ್ಥ.

=====

**ತಂಬಾಕು:** ತಂಬಾಕ ಎಂಬದು ಇದರ ಮತ್ತೊಂದು ರೂಪ. ಎಲೆಯಡಿಕೆಯ ಜೊತೆ ಅಗಿಯುವ, ಒಣಗಿದೆಲೆಗಳಿಂದ ಮಾಡಿದ ಪುಡಿಯನ್ನು ಮೂಗಿಗೇರಿಸುವ, ಹಾಗೂ ಅದರ ಹೊಗೆಯನ್ನು ಸೇವಿಸುವ ರೂಢಿಯಿದೆ. ಈ ಕೊನೆಯ ರೀತಿಯಿಂದಾಗಿ ಈ ಸಸ್ಯವನ್ನು ಹೊಗೆಸೊಪ್ಪು ಎಂಬ ಹೆಸರಿನಿಂದಲೂ ಕರೆಯುತ್ತಾರೆ.ತಂಬಾಕು ಎಂಬ ಶಬ್ದವು ಇಂಗ್ಲಿಷ್‌ನ 'ಟೊಬಾಕೊ'ದಿಂದ ಬಂದುದೆಂದು ಹೇಳುತ್ತಾರೆ.

ಧೂಮವರ್ತಿಯ ಉಲ್ಲೇಖ ಬಾಣ, ಸುಶ್ರುತ, ವಾಗ್ಭಟ, ಮತ್ತು ಚರಕರ ಪ್ರಾಚೀನ ಸಂಸ್ಕೃತ ಕೃತಿಗಳಲ್ಲಿ ಸಿಕ್ಕುತ್ತದೆ; 'ಸ್ಕಾಂದಪುರಾಣ'ದಲ್ಲಿ "ಧೂಮಪಾನೇನ ಭೋ ಪ್ರೇತಾ ಪ್ರೇತತ್ವಂ ಚೈವ ಜಾಯತೇ। ಕಲೌತು ಕಾಲರೂಪಂ ಹಿ ತಮಾಲಮೇವ ಜಾಯತೇ॥" ಎಂಬ ಶ್ಲೋಕವಿದೆ.(ಧೂಮಪಾನ ಮಾಡುವವರು ಮರಣಾನಂತರ ಪ್ರೇತಗಳಾಗುತ್ತಾರೆ; ಕಲಿಯುಗದಲ್ಲಿ ಕಲಿಯೇ ತಮಾಲಪತ್ರದ ರೂಪದಲ್ಲಿ ಅವತರಿಸುತ್ತಾನೆ ಎಂಬುದು ಇದರ ಅರ್ಥ).ಹೀಗಾಗಿ ಧೂಮಪಾನವು ನಮ್ಮಲ್ಲಿನ ಹಳೆಯ ಪದ್ಧತಿ ಎಂಬುದು ಕೆಲವರ ವಾದ.ಕನ್ನಡದಲ್ಲಿ 'ನಾಶಿ ತಂಬಾಕ'ದ ಪ್ರಸ್ತಾಪ ಅಂಬಿಗರ ಚೌಡಯ್ಯ ಮತ್ತು ಬಹುರೂಪಿ ಚೌಡಯ್ಯ ಎಂಬ ಇಬ್ಬರು ವಚನಕಾರರ ವಚನಗಳಲ್ಲಿದೆ.ನಮ್ಮಲ್ಲಿನ ಧೂಮಪಾನವು ತಮಾಲ ಅಥವಾ ತಮಾಲಪಾಕ ಎಂಬ ಸಸ್ಯದ ಹೊಗೆಯ ಸೇವನೆ. ತಮಾಲಪಾಕ ಎಂಬ ಶಬ್ದವೇ ತಂಬಾಕ ಏಕಾಗಿರಬಾರದು ಎಂಬುದು ಕೆಲವರ ವಾದ.

ಆದರೆ ಚರಿತ್ರೆ ಬೇರೆ ಕತೆಯನ್ನೇ ಹೇಳುತ್ತದೆ. ಕೊಲಂಬಸ್‌ನ ತಂಡ ಇಂಡಿಯವನ್ನು ಕಾಣಲೆಂದು ಸಮುದ್ರಯಾನ ಕೈಗೊಂಡದ್ದು ಮೊದಲು ಕ್ರಿಶ 1492 ರಲ್ಲಿ; ಅದು ತಲುಪಿದ್ದು ಲ್ಯಾಟಿನ್ ಅಮೆರಿಕವನ್ನು.ಅಲ್ಲಿನ ಜನ ಕೈಯಲ್ಲಿ ಸಣ್ಣ ಕೊಳವೆ ಹಿಡಿದು, ಅದರಲ್ಲಿ ಸಸ್ಯವೊಂದರ ಒಣಗಿದ ಎಲೆಯ ಪುಡಿಯನ್ನು ತುಂಬಿ ಒಂದು ತುದಿಗೆ ಬೆಂಕಿ ತಾಕಿಸಿ ಮತ್ತೊಂದು ತುದಿಯಿಂದ ಅದರ ಹೋಗೆಯನ್ನು ಸೇವಿಸುತ್ತಿದ್ದರು; ಆ ಕೊಳವೆಗೆ ಟೊಬಾಕೊ ಎಂದವರು ಕರೆಯುತ್ತಿದ್ದರು.ಅದು ಪೋರ್ಚುಗೀಸರ ಮೂಲಕ ಇಂಡಿಯ ಪ್ರವೇಶಿಸಿದ್ದು ಕ್ರಿಶ. 1556 ರ ನಂತರ.ಹೀಗಾಗಿ ಇಲ್ಲಿನ ತಮಾಲಪಾಕ ತಂಬಾಕಕ್ಕಿಂತ ಭಿನ್ನ ಸಸ್ಯವಾಗಿರಬೇಕು; ಆದ್ದರಿಂದ ಮೇಲೆ ಹೇಳೀದವರ ವಚನಗಳು ಪ್ರಾಯಶಃ ಪ್ರಕ್ಷಿಪ್ತವಾದವು. ●

## ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ

ಸಭಾಂಗಣಗಳ ಸೇವಾ ಶುಲ್ಕವನ್ನು ದಿನಾಂಕ 1–6–2017ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಬಳಕೆದಾರರು ಎಂದಿನಂತೆ ಸಹಕರಿಸಬೇಕಾಗಿ ಕೋರಿಕೆ.

**ಸಭಾಂಗಣಗಳ ಸೇವಾ ಶುಲ್ಕದ ವಿವರ**

| | ಎಂವಿಸೀ ಸಭಾಂಗಣ | ಶಾ.ಬಾಲೂರಾವ್ ಮಾತಿನಮನೆ | ತರಗತಿ ಕೊಠಡಿ |
|---|---|---|---|
| **1) ಸೋಮವಾರದಿಂದ ಶುಕ್ರವಾರದವರೆಗೆ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 1,000 | 500 | 500 |
| ಮಧ್ಯಾಹ್ನ 3–30 ರಿಂದ 7–00ರ ವರೆಗೆ | 1,000 | 500 | 500 |
| ಬೆಳಿಗ್ಗೆ 10–30 ರಿಂದ ಸಂಜೆ 7–00ರ ವರೆಗೆ | 2,000 | 1,000 | 1,000 |
| **2) ಶನಿವಾರ, ಭಾನುವಾರ ಹಾಗೂ ಸರ್ಕಾರಿ ರಜಾ ದಿನಗಳಲ್ಲಿ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 2,500 | 1,000 | 1,000 |
| ಮಧ್ಯಾಹ್ನ 2–00 ರಿಂದ 5–00ರ ವರೆಗೆ | 2,500 | 1,000 | 1,000 |
| ಬೆಳಿಗ್ಗೆ 10–30 ರಿಂದ ಸಂಜೆ 5–00ರ ವರೆಗೆ | 5,000 | 2,000 | 2,000 |

ವಿ.ಸೂಚನೆ: ಎಲ್.ಇ.ಡಿ. ಪ್ರೊಜೆಕ್ಟರ್ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆ ಹೆಚ್ಚುವರಿ ಶುಲ್ಕ
ಹವಾ ನಿಯಂತ್ರಕ ವ್ಯವಸ್ಥೆ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆಹೆಚ್ಚುವರಿ ಶುಲ್ಕ

ಸಭಾಂಗಣ ಶುಲ್ಕವನ್ನು ಪೂರ್ಣವಾಗಿ ಪಾವತಿಸಿ ಸಭಾಂಗಣವನ್ನು ಕಾಯ್ದಿರಿಸುವುದು. ಅಲ್ಲದೆ ರೂ. 1,000/–(ರೂ.ಒಂದು ಸಾವಿರ)ವನ್ನು ಮುಂಗಡವಾಗಿ ಕೊಡತಕ್ಕದ್ದು. ಮುಂಗಡ ಹಣವನ್ನು ಕಾರ್ಯಕ್ರಮದ ನಂತರ ಹಿಂತಿರುಗಿಸಲಾಗುವುದು.

## ಅಭಿನಂದನೆಗಳು

### ಡಾ. ವಸುಂಧರಾ ಭೂಪತಿ



ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಸ್ಥಾನಕ್ಕೆ ಡಾ.ವಸುಂಧರಾ ಭೂಪತಿ ಅವರನ್ನು ನೇಮಕ ಮಾಡಲಾಗಿದೆ. ಇದೇ ಮೊದಲಿಗೆ ಮಹಿಳೆಯೊಬ್ಬರು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿರುವುದು ಹೆಮ್ಮೆಯ ವಿಷಯವಾಗಿರುತ್ತದೆ.

ಡಾ. ವಸುಂಧರಾ ಭೂಪತಿ ಅವರನ್ನು ಬಿಎಂಶ್ರೀ ಪ್ರತಿಷ್ಠಾನದ ಬಳಗವು ಅಭಿನಂದಿಸುತ್ತದೆ ಹಾಗೂ ಅವರ ನೂತನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿ ಇನ್ನೂ ಉನ್ನತ ಹುದ್ದೆಗಳನ್ನು ಅಲಂಕರಿಸುವಂತೆ ಹಾರೈಸುತ್ತದೆ.

#### ಕಿರು ಪರಿಚಯ

ಡಾ. ವಸುಂಧರಾ ಭೂಪತಿಯವರು ಆಯುರ್ವೇದ ವೈದ್ಯೆಯಾಗಿ, ಸಾಹಿತಿಯಾಗಿ, ಸಂಘಟಕಿಯಾಗಿ, ಸಾಮಾಜಿಕ ಹೋರಾಟಗಾರ್ತಿಯಾಗಿ, ಅಂಕಣ ಗಾರ್ತಿಯಾಗಿ ಪ್ರಸಿದ್ಧರು.ವೈದ್ಯಸಾಹಿತ್ಯ, ಕತೆ, ನಾಟಕ, ಕವನ, ಗ್ರಂಥಸಂಪಾದನೆ ಸೇರಿದಂತೆ ಒಟ್ಟು 60 ಕೃತಿಗಳು ಪ್ರಕಟಗೊಂಡಿವೆ. ಇಂಗ್ಲಿಷ್ ಮತ್ತು ಹಿಂದಿ ಭಾಷೆಗೆಕೆಲವು ಪುಸ್ತಕಗಳು ಅನುವಾದಗೊಂಡಿವೆ. 'ವೈದ್ಯಲೋಕ' ಮಾಸಪತ್ರಿಕೆಯ ಸಂಪಾದಕರಾಗಿದ್ದಾರೆ. ಹೆಣ್ಣು ಭ್ರೂಣಹತ್ಯೆ ನಿಷೇಧ ಸಮಿತಿಯ ಸದಸ್ಯೆಯಾ ಗಿಕಾರ್ಯನಿರ್ವಹಿಸಿದ್ದಾರೆ. ಸತತ ಎರಡನೆಯ ಬಾರಿಗೆ ಚುನಾಯಿತರಾಗಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಗೌ॥ ಕಾರ್ಯದರ್ಶಿಯಾಗಿ ಹಾಗೂ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ರಾಜೀವ್‌ಗಾಂಧಿ ವಿಶ್ವವಿದ್ಯಾಲಯದ ಅಕಾಡೆಮಿಕ್ ಕೌನ್ಸಿಲ್ ಹಾಗೂ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯ ಸದಸ್ಯೆಯಾಗಿ ನೇಮಕಗೊಂಡಿದ್ದಾರೆ. ಮಹಿಳೆಯರ ಮತ್ತು ಮಕ್ಕಳ ಮೇಲಿನ ದೌರ್ಜನ್ಯ ತಡೆಗಾಗಿ ಕರ್ನಾಟಕ ಸರ್ಕಾರ ರಚಿಸಿರುವ ಉನ್ನತ ಮಟ್ಟದ ತಜ್ಞರ ಸಮಿತಿಯ ಸದಸ್ಯೆಯಾಗಿ ನೇಮಕಗೊಂಡಿದ್ದಾರೆ. 2012ರಲ್ಲಿ ಜಪಾನಿನ ಹಿರೋಷಿಮಾದಲ್ಲಿ ಜರುಗಿದ ಅಂತಾರಾಷ್ಟ್ರೀಯ ವೈದ್ಯರ ವಿಶ್ವ ಶಾಂತಿ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು. 2015ರಲ್ಲಿ ಜರುಗಿದ ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಪ್ರಸ್ತುತ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯೆಯಾಗಿ ನೇಮಕಗೊಂಡಿದ್ದಾರೆ.

ಡಾ. ವಸುಂಧರಾ ಭೂಪತಿಯವರಿಗೆ 'ಯೂನಿಸೆಫ್‌ಪತ್ರಿಕೋದ್ಯಮ' ಪ್ರಶಸ್ತಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯಿಂದ 'ಶ್ರೇಷ್ಠಲೇಖಕಿ' ಪುರಸ್ಕಾರ, 'ಅಕಲಂಕಪ್ರಶಸ್ತಿ', ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ 'ಶ್ರೇಷ್ಠ ವಿಜ್ಞಾನ ಸಂವಹನಕಾರ ರಾಜ್ಯ ಪ್ರಶಸ್ತಿ', 'ರಾಜ್ಯ ಪರಿಸರ ಪ್ರಶಸ್ತಿ', 'ಮಾತೋಶ್ರೀ ರತ್ನಮ್ಮ ಹೆಗ್ಗಡೆ' ಗ್ರಂಥ ಬಹುಮಾನ ಮತ್ತು ಡಾ. ಪಿ.ಎಸ್. ಶಂಕರ್ 'ವೈದ್ಯ ಸಾಹಿತ್ಯ ಪ್ರಶಸ್ತಿ', 'ವಿಶ್ವೇಶ್ವರಯ್ಯ ಪ್ರಶಸ್ತಿ', 'ಸೀತಾಸುತ ಸಾಹಿತ್ಯ ಪ್ರಶಸ್ತಿ' ಮುಂತಾದ ಅನೇಕ ಪ್ರಶಸ್ತಿಗಳು ದೊರೆತಿವೆ.

### ಪ್ರೊ.ಬೈರಮಂಗಲ ರಾಮೇಗೌಡ



ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯ ಪ್ರೊ.ಬೈರಮಂಗಲ ರಾಮೇಗೌಡ ಅವರನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರನ್ನಾಗಿ ನೇಮಕ ಮಾಡಲಾಗಿರುತ್ತದೆ.ಅವರಿಗೆ ಅವರಿಗೆ ಬಿಎಂಶ್ರೀ ಪ್ರತಿಷ್ಠಾನದ ಬಳಗವು ಅಭಿನಂದಿಸುತ್ತದೆ.

### ಡಾ.ಸಂಗಮೇಶ ಬಾದವಾಡಗಿ

ಬಿಎಂಶ್ರೀ ಪ್ರತಿಷ್ಠಾನದ ಸದಸ್ಯ ಡಾ.ಸಂಗಮೇಶ ಬಾದವಾಡಗಿ ಅವರನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರನ್ನಾಗಿ ನೇಮಕ ಮಾಡಲಾಗಿರುತ್ತದೆ. ಅವರಿಗೆ ಅವರಿಗೆ ಬಿಎಂಶ್ರೀ ಪ್ರತಿಷ್ಠಾನದ ಬಳಗವು ಅಭಿನಂದಿಸುತ್ತದೆ.

## ಶ್ರದ್ಧಾಂಜಲಿ

### ಏಣಗಿ ಬಾಳಪ್ಪ



'ನಡೆದಾಡುವ ರಂಗಭೂಮಿಯ ವಿಶ್ವಕೋಶ' ಎನ್ನುವ ಖ್ಯಾತಿ ಹೊಂದಿದ್ದ ಹಿರಿಯ ರಂಗಕರ್ಮಿ ಏಣಗಿ ಬಾಳಪ್ಪ (103) ಜಿಲ್ಲೆಯ ಸವದತ್ತಿ ತಾಲ್ಲೂಕಿನ ಏಣಗಿಯಲ್ಲಿ ವಿಧಿವಶರಾದರು. ನೂರಾರು ನಾಟಕಗಳಲ್ಲಿ, ಹತ್ತಾರು ಸಿನಿಮಾಗಳಲ್ಲಿ ನಟಿಸಿದ್ದರು. ಅದ್ಭುತ ಕಂಠಸಿರಿಯನ್ನು ಹೊಂದಿದ್ದ ಅವರು ಹಲವು ರಂಗಗೀತೆಗಳಿಗೆ ಮರುಜೀವ ನೀಡಿದ್ದರು.

ಏಣಗಿ ಗ್ರಾಮದ ಲೋಕೂರ ಮನೆತನದ ಕರಿಬಸಪ್ಪ ಮತ್ತು ಬಾಳಮ್ಮ ದಂಪತಿಯ ಪುತ್ರನಾಗಿ 1914ರಲ್ಲಿ ಜನಿಸಿದ್ದರು. ಸುಮಾರು 12ನೇ ವಯಸ್ಸಿನಲ್ಲಿಯೇ 'ಪಾದುಕಾ ಪಟ್ಟಾಭಿಷೇಕ' ನಾಟಕದ ಮೂಲಕ ರಂಗಭೂಮಿಯನ್ನು ಪ್ರವೇಶಿಸಿದ್ದರು. ಮೃತರಿಗೆ ಎರಡನೇ ಪತ್ನಿ, ನಾಲ್ಕು ಜನ ಪುತ್ರರು, ನಾಲ್ಕು ಜನ ಪುತ್ರಿಯರು ಇದ್ದಾರೆ. ಚಿಕ್ಕ ವಯಸ್ಸಿನಲ್ಲಿಯೇ ಬಾಳಪ್ಪ ಅವರು ತಂದೆಯನ್ನು ಕಳೆದುಕೊಂಡಿದ್ದರು. ಕುಟುಂಬದ ಹೊಣೆಯು ತಾಯಿಯ ಮೇಲೆ ಬಿದ್ದಿತ್ತು.ಕುಟುಂಬದ ಆರ್ಥಿಕ ಚೆನ್ನಾಗಿರಲಿಲ್ಲ. ಇದೇ ಸಮಯದಲ್ಲಿ ಪಕ್ಕದ ಬೈಲಹೊಂಗಲದಲ್ಲಿ 'ಪಾದುಕಾ ಪಟ್ಟಾಭಿಷೇಕ' ನಾಟಕ ಬಂದಿತ್ತು. ನಾಟಕದ ಪ್ರಮುಖ ಪಾತ್ರಧಾರಿ ಲವ ಪಾತ್ರಕ್ಕೆ ಬಾಲನಟನ ಅವಶ್ಯಕತೆ ಇತ್ತು. ಉತ್ತಮ ಕಂಠಸಿರಿ ಹೊಂದಿದ್ದ ಬಾಳಪ್ಪ ಅವರನ್ನು ಈ ಪಾತ್ರಕ್ಕೆ ಆಯ್ಕೆ ಮಾಡಲಾಯಿತು. ಈ ಮೂಲಕ ಬಾಳಪ್ಪ ತಮ್ಮ 12ನೇ ವಯಸ್ಸಿನಲ್ಲಿ ರಂಗ ಪ್ರವೇಶಿಸಿದರು.

ಬಾಳಪ್ಪ ಅವರ ಪ್ರತಿಭೆಯನ್ನು ಗುರುತಿಸಿದ ಚಿಕ್ಕೋಡಿಯ ನಾಟಕ ಕಲಾವಿದ ಶಿವಲಿಂಗ ಸ್ವಾಮಿ ಹಲವು ನಾಟಕಗಳಲ್ಲಿ ಅವಕಾಶ ನೀಡಿದರು. ಹಲವು ನಾಟಕಗಳಲ್ಲಿ ನಟಿಸಿದ ನಂತರ ಬಾಳಪ್ಪ ಅವರು 'ಕಲಾವೈಭವ ನಾಟಕ ಸಂಘ'ವನ್ನು ಸ್ಥಾಪಿಸಿದರು. ಸಮಕಾಲೀನ ಸಮಸ್ಯೆಗಳನ್ನು ಇಟ್ಟುಕೊಂಡ ಹೊಸ ಹೊಸ ನಾಟಕಗಳನ್ನು ಬರೆಯಿಸಿದರು. ಸ್ತ್ರೀ– ಪುರುಷ ನಾಟಕಗಳಲ್ಲಿ ಮಿಂಚಿದ ಅವರು, 'ಜಗಜ್ಯೋತಿ ಬಸವೇಶ್ವರ' ನಾಟಕದ ಮೂಲಕ ಜನಪ್ರಿಯತೆ ಗಳಿಸಿದರು.

1973ರಲ್ಲಿ ಕರ್ನಾಟಕ ರಾಜ್ಯ ಪ್ರಶಸ್ತಿ, 1976ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, 1978ರಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ ಪ್ರಶಸ್ತಿ, 1995ರಲ್ಲಿ ಕೇಂದ್ರ ಸರ್ಕಾರದ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, 1995ರಲ್ಲಿ ಗುಬ್ಬಿ ವೀರಣ್ಣ ಪ್ರಶಸ್ತಿ, 2005ರಲ್ಲಿ ಕನ್ನಡ ವಿಶ್ವವಿದ್ಯಾಲಯದ ನಾಡೋಜ ಪ್ರಶಸ್ತಿ, 2006ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ, ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ ಸಂದಿವೆ. ರಂಗಭೂಮಿಗೆ ಅನುಪಮ ಸೇವೆ ಸಲ್ಲಿಸಿರುವ ಏಣಗಿ ಬಾಳಪ್ಪ ಅವರು ಹಲವು ಸಿನಿಮಾಗಳಲ್ಲೂ ಅಭಿನಯಿಸಿದ್ದರು. ರಂಗಕರ್ಮಿ ಶತಾಯುಷಿ ಏಣಗಿ ಬಾಳಪ್ಪ ಅವರಿಗೆ ರಂಗಭೂಮಿ(ನಾಟಕ) ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಗೆ ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿದೆ. 2013ರ ಮೈಸೂರು ದಸರಾ ಮಹೋತ್ಸವದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಅಂಬಾ ವಿಲಾಸ ಅರಮನೆಯಲ್ಲಿ ಬಾಳಪ್ಪ ಅವರು ಉದ್ಘಾಟಿಸಿದ್ದರು.

ಹೊಂಗನಸು ಬಳಗ ಏಣಗಿ ಬಾಳಪ್ಪ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

## ಶ್ರದ್ಧಾಂಜಲಿ

### ಟಿ.ವಿ.ಗುರುಮೂರ್ತಿ



ಕನ್ನಡ ಚಿತ್ರರಂಗ ಹಾಗೂ ಕಿರುತೆರೆಯ ಹಿರಿಯ ನಟ ಟಿ.ವಿ.ಗುರುಮೂರ್ತಿ (70) ಶುಕ್ರವಾರ ಬೆಂಗಳೂರಿನಲ್ಲಿ ನಿಧನರಾದರು. ಹಲವಾರು ಕನ್ನಡದ ಸಿನಿಮಾಗಳು, ನಾಟಕಗಳು ಹಾಗೂ ಧಾರಾವಾಹಿಗಳಲ್ಲಿ ನಟಿಸಿದ್ದ ಅವರು ವಯೋಸಹಜ ಅನಾರೋಗ್ಯದಿಂದ ಮರಣ ಹೊಂದಿದ್ದಾರೆಂದು ತಿಳಿದುಬಂದಿದೆ. ಸಿನಿಮಾ ವಲಯದಲ್ಲಿ ಗುರುಮಾಮ ಎಂದೇ ಪ್ರಸಿದ್ಧರಾಗಿದ್ದ ಟಿ.ವಿ.ಗುರುಮೂರ್ತಿಅವರು ಮೂಲತಃ ಬ್ಯಾಂಕ್ ಉದ್ಯೋಗಿಯಾಗಿದ್ದರು. ಅಖಿಲ ಭಾರತ ಬ್ಯಾಂಕ್ ನೌಕರರ ಸಂಘದ ಅಧ್ಯಕ್ಷರೂ ಆಗಿದ್ದರು. ತುಮಕೂರಿನ ತಿಪಟೂರಿನವರಾದ ಇವರು ವೃತ್ತಿಗಿಂತ ಅಭಿನಯದಲ್ಲಿ ಹೆಚ್ಚು ಆಸಕ್ತಿ ಹೊಂದಿ, ಅಡಚಣೆಗಾಗಿ ಕ್ಷಮಿಸಿ, ಮಿ.ನಿರುದ್ಯೋಗಿ, ಒಂದು ಸುಳ್ಳು ಸಂಸಾರಕ್ಕೆ ಮುಳ್ಳು, ವೆಂಕಟರಮಣ ಗೋವಿಂದ, ಸಿಲ್ಲಿಲಲ್ಲಿ, ಪಾಂಡುರಂಗ ವಿಠಲ, ಪಾರ್ವತಿ ಪರಮೇಶ್ವರ, ಮುಕ್ತಮುಕ್ತ ಮುಂತಾದ ಧಾರಾವಾಹಿಗಳಲ್ಲಿ ನಟಿಸಿದ್ದರು.

ಹೊಂಗನಸು ಬಳಗ ಟಿ.ವಿ.ಗುರುಮೂರ್ತಿ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ

## ಕರಡಚ್ಚು ತಿದ್ದುವಿಕೆ(proof Reading) ಮತ್ತು ಕನ್ನಡ ಭಾಷೆ.

ಇತ್ತೀಚಿನ ದಿನಗಳಲ್ಲಿ ಅಚ್ಚಾಗುತ್ತಿರುವ ಕನ್ನಡ ಪುಸ್ತಕಗಳಲ್ಲಿ ಮುದ್ರಣ ದೋಷಗಳೂ ಮತ್ತು ಭಾಷಾದೋಷಗಳೂ ಹೆಚ್ಚು ಹೆಚ್ಚಾಗಿ ಕಂಡುಬರುತ್ತಿದೆ. ಪುಸ್ತಕಗಳನ್ನು ಓದುವಾಗ ಹಿಂಸೆಯಾಗುತ್ತದೆ. ಹೀಗಾಗಲೂ, ಹಲವಾರು ಕಾರಣಗಳನ್ನು ಶೋಧಿಸಿ, ಅವುಗಳಿಗೆಲ್ಲಾ ಪರಿಹಾರ ರೂಪದಲ್ಲಿ, ಪ್ರೊ.ಜಿ.ಅಶ್ವತ್ಥನಾರಾಯಣ ಅವರು ಕನ್ನಡ ಪುಸ್ತಕ ಪ್ರಾಧಿಕಾರದ ಯೋಜನೆಯಡಿಯಲ್ಲಿ, ಬೆರಳಚ್ಚುಗಾರರಿಗೂ, ಕರಡಚ್ಚು ತಿದ್ದುವವರಿಗೂ ಡಿಟಿಪಿ ಮಾಡುವವರಿಗೂ, ಲೇಖಕರಿಗೂ ಮುದ್ರಕರಿಗೂ ಮತ್ತು ಪ್ರಕಾಶಕರಿಗೂ ಉಪಯುಕ್ತವಾಗುವ ಹಾಗೆ "ಕರಡಚ್ಚು ತಿದ್ದುವಿಕೆ ಮತ್ತು ಕನ್ನಡ ಭಾಷೆ" ಯೆಂಬ ಈ ಬಗೆಯ ಮೊದಲ ಪುಸ್ತಕವೊಂದನ್ನು ರಚಿಸಿದ್ದಾರೆ. ಈ ಪುಸ್ತಕವು ಕನ್ನಡ ಪುಸ್ತಕ ಪ್ರಾಧಿಕಾರದಲ್ಲಿ ಲಭ್ಯವಿದೆ.

### ಪ್ರಕಟಣೆ

ಬಿ.ಎಂ.ಶ್ರೀ.ಪ್ರತಿಷ್ಠಾನವು ಆರು ತಿಂಗಳ ಅವಧಿಯ 'ಹಳಗನ್ನಡ ಡಿಪ್ಲೊಮ' ತರಗತಿಗಳನ್ನು ಆರಂಭಿಸಲು ತೀರ್ಮಾನಿಸಿದೆ. ವ್ಯಾಸಂಗವು ಆರು ತಿಂಗಳಿನ ಅವಧಿಯದಾಗಿದ್ದು, ತರಗತಿಗಳು 2017ರ ಅಕ್ಟೋಬರ್ ಮೊದಲ ವಾರದಲ್ಲಿ ಆರಂಭವಾಗುತ್ತವೆ. ಅದರಲ್ಲಿ ಕಾವ್ಯಭಾಗಗಳು ಮತ್ತು ಶಾಸ್ತ್ರ ವಿಷಯಗಳನ್ನೊಳಗೊಂಡಂತೆ ನಾಲ್ಕು ಪತ್ರಿಕೆಗಳಿದ್ದು, ತರಗತಿಗಳು ವಾರದ ಕೊನೆಯಲ್ಲಿ ಸಂಜೆ ವೇಳೆ ನಡೆಯುತ್ತವೆ. ನುರಿತ ಹಾಗೂ ಪ್ರಖ್ಯಾತರಾದ ವಿದ್ವಾಂಸರು ತರಗತಿಗಳನ್ನು ನಡೆಸಿಕೊಡಲು ಒಪ್ಪಿದ್ದಾರೆ. ಎಲ್ಲ ಆಸಕ್ತರಿಗೂ ಅವಕಾಶವಿದೆ. ನೋಂದಣಿಗಾಗಿ ಮತ್ತು ಹೆಚ್ಚಿನ ವಿವರಗಳಿಗಾಗಿ ಪ್ರತಿಷ್ಠಾನದ ಕಚೇರಿಯ ಅವಧಿಯಲ್ಲಿ (ಮಧ್ಯಾಹ್ನ 12–30 ರಿಂದ ಸಂಜೆ 7–00 ಗಂ–ಟೆ) ಖುದ್ದಾಗಿಯಾಗಲೀ ದೂರವಾಣಿ ಸಂಖ್ಯೆ 26615877/ 26676773 ಮೂಲಕವಾಗಲೀ ಸಂಪರ್ಕಿಸಬಹುದು.

### ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ. ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-08-2017**


## ೨೦೧೭ ಆಗಸ್ಟ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಆಗಸ್ಟ್ ತಿಂಗಳಿನಲ್ಲಿ ೧೩* ಗ್ರಂಥಗಳ ಶುಷ್ಕ ಶುದ್ಧೀಕರಣ, ೧೪(ಸಂರಕ್ಷಣೆಗಾಗಿ ಬಂದ ಗ್ರಂಥಗಳೂ ಸೇರಿವೆ) ಮಸಿ+ತೈಲ, ೧೪* ಗ್ರಂಥ ಪತ್ರಗಳ ಮರುಜೋಡಣೆ ಕಾರ್ಯ, ೧೦* ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧೦* ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೧೦* ಗ್ರಂಥಗಳಿಗೆ ಸೂಚಿ, ೭ (೨೦೨೮ ಹಾಳೆಗಳು) ಕಾಗದದ ಹಸ್ತಪ್ರತಿಗಳ ಸಂರಕ್ಷಣೆ ಮಾಡಲಾಗಿದೆ.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

**ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ.**
**ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.**

## ಕೋರಿಕೆ :

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ**

ತೆರೆದ–ಅಂಚೆ

ಶ್ರೀಮತಿ/ಶ್ರೀ...........................................................................................

...........................................................................................

...........................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭